ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಆಸ್ಪತ್ರೆಗಳ ಮೂಲಭೂತ ಸೌಕರ್ಯಗಳ ಕುರಿತು

ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

408 (431) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಪ್ರಸ್ತುತ ವೆನ್ಲಾಕ್ ಆಸ್ಪತ್ರೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಒಟ್ಟು ಐ.ಸಿ.ಯು ಗಳ ಸಂಖ್ಯೆ ಎಷ್ಟು ; (ಸುಸ್ಥಿತಿಯಲ್ಲಿರುವ ಐ.ಸಿ.ಯು.ಗಳ ವಿವರ ಒದಗಿಸುವುದು)

(ಆ) ಪ್ರಸ್ತುತ ಐ.ಸಿ.ಯು ಗೆ ದಾಖಲಾಗಿರುವ ಒಳ ರೋಗಿಗಳ ಸಂಖ್ಯೆಗೆ ಅನುಗುಣವಾಗಿ ಐ.ಸಿ.ಯು ಲಭ್ಯವಿದೆಯೇ ; ಐ.ಸಿ.ಯು. ನ ಕೊರತೆ ಇದೆಯೇ ; ಸಂಪೂರ್ಣ ಮಾಹಿತಿ ನೀಡುವುದು ;

(ಇ) ಐ.ಸಿ.ಯು ಕೊರತೆಯಿಂದ ಪ್ರತಿದಿನ ರೋಗಿಗಳಿಗೆ ತೊಂದರೆಯಾಗುತ್ತಿರುವುದು ನಿಜವೆ ;

(ಈ) ಸದರಿ ಆಸ್ಪತ್ರೆಯಲ್ಲಿರುವ ಒಟ್ಟು ಬೆಡ್‌ಗಳ ಸಂಖ್ಯೆ ಎಷ್ಟು ; ಒಳರೋಗಿಗಳ ಸಂಖ್ಯೆಗೆ ಅನುಗುಣವಾಗಿ ಬೆಡ್ ಕೊರತೆಯಾಗಿದೆಯೇ ; (ವಿವರ ನೀಡುವುದು)

(ಉ) ಸದರಿ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಕ್ಸ್-ರೇ ಯಂತ್ರಗಳ ಸಂಖ್ಯೆ ಎಷ್ಟು ; ಇವುಗಳಲ್ಲಿ ಎಷ್ಟು ಸುಸ್ಥಿತಿಯಲ್ಲಿವೆ ; ಎಷ್ಟು ಕೆಟ್ಟು ನಿಂತಿವೆ ; ಎಷ್ಟು ಕೊರತೆ ಇವೆ ; (ಸಂಪೂರ್ಣ ಮಾಹಿತಿ ನೀಡುವುದು)

(ಊ) ಸದರಿ ಆಸ್ಪತ್ರೆಯಲ್ಲಿರುವ ಡಯಾಲಿಸಿಸ್ ಮಿಷಿನ್‌ಗಳೆಷ್ಟು ; ಇವುಗಳಲ್ಲಿ ಎಷ್ಟು ಸುಸ್ಥಿತಿಯಲ್ಲಿವೆ ; ಎಷ್ಟು ಕೆಟ್ಟು ನಿಂತಿವೆ ; ರೋಗಿಗಳ ಸಂಖ್ಯೆಗೆ ಅನುಗುಣವಾಗಿ ಎಷ್ಟು ಡಯಾಲಿಸಿಸ್ ಯಂತ್ರಗಳ ಅಗತ್ಯ ಇದೆ ? (ಸಂಪೂರ್ಣ ಮಾಹಿತಿ ನೀಡುವುದು)